# ವೇತನ ಹೆಚ್ಚಳಕ್ಕಾಗಿ ತೋಟ ಕಾರ್ಮಿಕರ ಸತ್ಯಾಗ್ರಹ ಸಿದ್ಧತೆ

ಜಯಪುರ: ಹೈಕೋರ್ಟ್ ತೀರ್ಪಿನಿಂದಾಗಿ ರದ್ದಾಗಿರುವ, ಕನಿಷ್ಠ ವೇತನದ ಬಗೆಗಿನ ಸರ್ಕಾರಿ ಆಜ್ಞೆಯ ರೀತ್ಯಾ ನಿಗದಿ ಮಾಡಲಾಗಿದ್ದ ೮.೫೦ ರೂ. ಕನಿಷ್ಠ ವೇತನ ಕೂಡ ನ್ಯಾಯಕ್ಕೆ ವಿರೋಧವಾದ್ದಾಗಿತ್ತು; ಸಲಹಾ ಸಮಿತಿಯವರು ತಮಗಿಷ್ಟ ಬಂದ ರೀತಿ ನಿಗದಿ ಮಾಡಿದ್ದಾಗಿತ್ತು ಎಂದು ಇಲ್ಲಿನ 'ಕರ್ನಾಟಕ ಎಸ್ಟೇಟ್ ಲೇಬರ್ ಯೂನಿಯನ್' ವರ್ಣಿಸಿದೆ.

ಒಪ್ಪಂದ ವೇತನವನ್ನು ಹೆಚ್ಚಿಸುವಂತೆ ತಮ್ಮ ಸಂಘ ಸೆ. ೦ರಂದು ಮಾಲೀಕರ ಸಂಘಕ್ಕೂ ಮ್ಯಾನೇಜ್‌ಮೆಂಟಿನವರಿಗೂ ಕೊಟ್ಟ ನೋಟೀಸಿಗೆ ಯಾವ ಉತ್ತರವೂ ಬರದಿರುವುದರಿಂದ ಅ. ೫ರಂದು ಒಂದು ದಿನದ ಸಾಂಕೇತಿಕ ಮುಷ್ಕರದ ನಂತರವೂ ಮಾಲೀಕ ವರ್ಗ ಒಪ್ಪಂದಕ್ಕೆ ಮುಂದೆ ಬರದಿದ್ದಲ್ಲಿ ನವೆಂಬರ್ ೧ರಿಂದ ಸತ್ಯಾಗ್ರಹ ಹೋರಾಟ ನಡೆಸಲು ಸಿದ್ಧರಾಗಿರಬೇಕೆಂದು ಯೂನಿಯನ್ನಿನ ಪ್ರಧಾನ ಕಾರ್ಯದರ್ಶಿ ಪಿ.ಪಿ.ಎಸ್. ಮಣಿ ಕಾರ್ಮಿಕರನ್ನು ವಿನಂತಿಸಿದ್ದಾರೆ.

## ಸಿದ್ಧರ ಮಠದಲ್ಲಿ ಕಾಂಪೋಸ್ಟ್ ಶಿಬಿರ

ಸಿದ್ಧರ ಮಠ: ಇಲ್ಲಿನ ಸಿದ್ದೇಶ್ವರ ಯುವಕ ಸಂಘದ ಆಶ್ರಯದಲ್ಲಿ ಕೊಪ್ಪದ ಕೃಷಿ ಇಲಾಖೆಯವರು ಅ. ೨೨ ರಂದು ಕಾಂಪೋಸ್ಟ್ ಗೊಬ್ಬರದ ತಯಾರಿಕೆಯ ತರಬೇತಿ ಶಿಬಿರ ಏರ್ಪಡಿಸಿದ್ದರು. ತಾ॥ ಯುವಜನ ಒಕ್ಕೂಟದ ಅಧ್ಯಕ್ಷ ಹೆಚ್.ಎಂ. ಶ್ರೀಧರ್ ಅಧ್ಯಕ್ಷತೆ ವಹಿಸಿದ್ದರು ಕೊಪ್ಪದ ಎಸಿಎಫ್ ಒ ಎ. ಡಿ.ತಿವಾರಿ. ಪಶು ವೈದ್ಯಾಧಿಕಾರಿ ಕೆ. ಜಿ. ಶ್ರೀನಿವಾಸಮೂರ್ತಿ, ಕೆಲಕುಳಿ ಗ್ರಾಮ ಪಂಚಾಯ್ತಿ ಉಪಾಧ್ಯಕ್ಷ ಲಾರೆನ್ಸ್ ಡಯಾಸ್ ಮುಖ್ಯ ಅತಿಥಿಗಳಾಗಿದ್ದರು. ಎಂ. ಎಸ್. ಸುಬ್ಬಯ್ಯ ಗೌಡ ಕಾಂಪೋಸ್ಟ್ ಬಗ್ಗೆ ಮಾಹಿತಿ ನೀಡಿದರು.

ತೋಟಗಾರಿಕೆ ಇಲಾಖೆಯವರು ತೆಂಗಿನ ಸಸಿಗಳನ್ನು ಹಂಚಿದರು.

ಸಿದ್ದೇಶ್ವರ ಯುವಕ ಸಂಘ ಕಳೆದ ವರ್ಷ ಕಾಂಪೋಸ್ಟ್ ಗೊಬ್ಬರ ತಯಾರಿಸಿದ್ದು, ಅದರ ಹರಾಜಿನಿಂದ ೧೦೦ ರೂ. ಆದಾಯ ಪಡೆದಿದೆಯೆಂದು ಸಂಘದ ಅಧ್ಯಕ್ಷ ಹೆಚ್. ಎಂ. ಶ್ರೀಧರ್ ತಿಳಿಸಿದ್ದಾರೆ.

## ಬಡವರನ್ನು ಬಾಳಲು ಬಿಡದವರು

(೧ನೇ ಪುಟದಿಂದ)

ಮುದ್ದನ ಮಕ್ಕಳು ತಮ್ಮ ದರ್ಖಾಸ್ತು ಜಾಗದಲ್ಲಿ ಮನೆ ಕಟ್ಟಲು ಹೋದರೆ ಸ್ವತಃ ಜಮೀನ್ದಾರರಾದ ಗ್ರಾಮಾಧ್ಯಕ್ಷರು "ಸಾಗುವಳಿ ಚೀಟಿ ತಾ" ಎನ್ನುತ್ತಾರಂತೆ. "ಊರಿನ ಬಲಿಷ್ಠರೆಲ್ಲ ಒಂದಾಗಿ ಹಿಂಸೆ ಕೊಡುತ್ತಿದ್ದಾರೆ. ಪೋಲೀಸರಾಗಲಿ, ತಹಸೀಲ್ದಾರರಾಗಲಿ ರಕ್ಷಣೆ ಕೊಡುತ್ತಿಲ್ಲ. ಅರ್ಜಿ ಬರೆದು ಸಾಕಾಗಿದೆ." ಎಂದಿರುವ ನೊಂದ ದಲಿತರು, "ಹರಿಜನರು, ಹಿಂದುಳಿದವರು ಎಚ್ಚೆತ್ತರೆ, ಸ್ವಂತ ಕಾಲ ಮೇಲೆ ನಿಲ್ಲಲು ಪ್ರಯತ್ನ ಪಟ್ಟರೆ ಇವರು ಬದುಕಲು ಬಿಡುವುದಿಲ್ಲ" ಎಂಬ, ಈ ದೇಶದ ಪರಂಪರೆಯ ಸತ್ಯವನ್ನು ಎತ್ತಿ ಹೇಳಿದ್ದಾರೆ.

ಜಾಗದ ಜಗಳ ಹೊಡೆದಾಟದ ಮಟ್ಟ ಮುಟ್ಟುತ್ತಿದ್ದು, ಜಿಲ್ಲಾಧಿಕಾರಿಗಳು ಹಾಗೂ ಸರ್ಕಾರ ರಕ್ಷಣೆ ಕೊಡಬೇಕೆಂದು ಕೋರಿರುವ ನೊಂದ ಕುಟುಂಬ, ಸಾವು-ನೋವು ಆದರೆ ಇವರೇ ಜವಾಬ್ದಾರರಾಗುತ್ತಾರೆಂದು ಎಚ್ಚರಿಸಿದ್ದಾರೆ.

## ನೆರೆ ಪರಿಹಾರಕ್ಕೆ ಒತ್ತಾಯಿಸಿ ಭಾಜಪಾ ಸತ್ಯಾಗ್ರಹ

ತೀರ್ಥಹಳ್ಳಿ: ಭಾ.ಜ.ಪಾ.ದ ಆರಗ ಸ್ಥಾನೀಯ ಸಮಿತಿಯು ನೆರೆಯಿಂದ ನೊಂದವರಿಂದ ತಾ॥ ಕಚೇರಿಗೆ ಜಾಥಾ ಸಂಘಟಿಸಿತ್ತು. ಘೋಷಣೆಗಳೊಂದಿಗೆ ಮೆರವಣಿಗೆಯಲ್ಲಿ ಬಂದ ರೈತರು, ನಿರ್ದಿಷ್ಟ ದಿನದೊಳಗೆ ಪರಿಹಾರ ಹಂಚಬೇಕೆಂದು ಒತ್ತಾಯಿಸಿ ಧರಣಿ ಕುಳಿತಾಗ ದೂರವಾಣಿ ಮೂಲಕ ಮೇಲಧಿಕಾರಿಗಳನ್ನು ಸಂಪರ್ಕಿಸಿದ ತಹಸೀಲ್ದಾರ್‌ರವರು, ಅ.೩೫ ರೊಳಗೆ ಪೂರ್ತಿ ಪರಿಹಾರ ಹಂಚುವುದಾಗಿ ಭರವಸೆ ಕೊಟ್ಟನಂತರ ಧರಣಿ ನಿಲ್ಲಿಸಲಾಯಿತು. ಸತ್ಯಾಗ್ರಹದ ಮುಖಂಡತ್ವ ವಹಿಸಿದ್ದ ಸ್ಥಾನೀಯ ಸಮಿತಿ ಕಾರ್ಯಕರ್ತರಿಗೆ ತಾ॥ ಸಮಿತಿ ಮುಖಂಡರು ಮಾರ್ಗದರ್ಶನ ನೀಡಿದರು.

## ಕಾರು ಕಳ್ಳರಿಗೆ ಶಿಕ್ಷೆ

ನ.ರಾ.ಪುರ: ಹಲವಾರು ಕಡೆ ಕಾರು ಕಳ್ಳತನ ನಡೆಸಿ ಈಚೆಗೆ ಬಾಳೆಹೊನ್ನೂರಿನಲ್ಲಿ ೩ ಕಾರು ಕದಿಯಲು ವಿಫಲ ಪ್ರಯತ್ನ ನಡೆಸಿ ಪೋಲೀಸರಿಂದ ದಸ್ತಗಿರಿಯಾಗಿದ್ದ ಕೊಡಗಿನ ಗಣೇಶ ಮತ್ತು ಆರ್ಮುಗಂ ಎಂಬಿಬ್ಬರು ಅಪರಾಧಿಗಳಿಗೆ ಇಲ್ಲಿನ ಪ್ರ.ದ. ನ್ಯಾಯಾಧೀಶರು ೧ ವರ್ಷದ ಸಜೆ ವಿಧಿಸಿದ್ದಾರೆ.

## ಜಪ್ತಿ ಪ್ರಕರಣಗಳ ವಿವರ ರೈತ ಸಂಘದಿಂದ ಕೇಳಿಕೆ

ತೀರ್ಥಹಳ್ಳಿ: ಸಹಕಾರಿ ಹಾಗೂ ಕಂದಾಯ ಇಲಾಖೆ ಅಧಿಕಾರಿಗಳು ಬಾಕಿದಾರ ರೈತರಿಂದ ಜಪ್ತಿ ಮಾಡಿದ ಚರಾಸ್ತಿ ಮಾಲುಗಳನ್ನು ಹಿಂದಕ್ಕೆ ಕೊಡುವ ಬಗ್ಗೆ ರೈತ ಸಂಘದೊಂದಿಗೆ ಚರ್ಚಿಸಲು ಸರ್ಕಾರ ಒಪ್ಪಿದ್ದು, ಇಂಥ ಪ್ರಕರಣಗಳ ಪೂರ್ಣ ಮಾಹಿತಿಯನ್ನು ಒದಗಿಸುವಂತೆ ಕರ್ನಾಟಕ ರಾಜ್ಯ ರೈತ ಸಂಘ ತನ್ನ ಎಲ್ಲಾ ತಾಲ್ಲೂಕು ಘಟಕಗಳನ್ನು ಕೇಳಿದೆಯೆಂದು ರೈತ ಸಂಘದ ನಕ್ಕಾರರು ತಿಳಿಸಿದ್ದಾರೆ.

**ಲಂಚಕಕ್ಕಿದಪ್ರಸಂಗ** (೧ನೇ ಪುಟದಿಂದ)

ತಕ್ಷಣ ಆ ನೌಕರರನ್ನು ವಜಾಮಾಡುವುದಾಗಿ ಭರವಸೆ ಕೊಟ್ಟರು.

ಅಧಿಕಾರಿಗಳು—ನೌಕರರು ತಮ್ಮ ಕರ್ತವ್ಯ ಮಾಡಲು ಲಂಚ ಕೇಳಿದರೆ ರೈತ ಸಂಘಕ್ಕೆ ತಿಳಿಸಬೇಕೆಂದು ಕಾರ್ಯಕರ್ತರು ಮನವಿ ಮಾಡಿದ್ದಾರೆ.

## ಕೊರ್ಡ ಹಿತ್ಲಿನಲ್ಲಿ ನ. ೪ ರಂದು ಉದರದರ್ಶಕ ಸಂತಾನ ಹರಣ ಶಸ್ತ್ರ ಚಿಕಿತ್ಸಾ ಶಿಬಿರ

ಕೊಪ್ಪ: ಇಲ್ಲಿನ ಲಯನ್ಸ್ ಕ್ಲಬ್ ಹಾಗೂ ಕೊಪ್ಪ ಆರೋಗ್ಯ ಕೇಂದ್ರದ ವ್ಯಾಪ್ತಿಯ ಎಲ್ಲಾ ಪ್ರಾಥಮಿಕ ಆರೋಗ್ಯ ಘಟಕಗಳ ಸಂಯುಕ್ತ ಆಶ್ರಯದಲ್ಲಿ ಉದರದರ್ಶಕ (ಲ್ಯಾಪ್ರೊಸ್ಕೊಪಿಕ್) ಸಂತಾನ ಹರಣ ಶಸ್ತ್ರ ಚಿಕಿತ್ಸಾ ಶಿಬಿರವನ್ನು ಕೊರ್ಡಹಿತ್ಲಿನ ಆಸ್ಪತ್ರೆಯಲ್ಲಿ ನವೆಂಬರ್ ೪ರ ಗುರುವಾರ ಏರ್ಪಡಿಸಲಾಗಿದೆ. ಶಸ್ತ್ರಚಿಕಿತ್ಸೆ ಮಾಡಿಸಿಕೊಳ್ಳುವವರಿಗೆ ಉಚಿತ ವಾಹನ ಸೌಲಭ್ಯ ಏರ್ಪಡಿಸಲಾಗಿದೆ.

## ಲೋಕೋಪಯೋಗಿ ಕಾಮಗಾರಿಗಳು

(೩ನೇ ಪುಟದಿಂದ)

### ಗಿರಿಜನ ರಸ್ತೆಗಳು

೧. ಮೇಗುಂದ ಹೋಬಳಿಯ ಅತ್ತಿಕುಡಿಗೆಯಿಂದ ಶಾಂತಿಗ್ರಾಮ ಮಾರ್ಗವಾಗಿ ಮೆಣಸಿನ ಹಾಡ್ಯಕ್ಕೆ ಸಂಪರ್ಕ ರಸ್ತೆ: ೧೦.೩೮ ಲಕ್ಷ ರೂ. ಗಳ ಯೋಜನೆ ಮಂಜೂರಾಗಿದ್ದು ಟೆಂಡರ್ ಕರೆಯಲಾಗಿದೆ.

೨. ಕೊಪ್ಪ ತಾ॥ ನ ಸಿದ್ದರ ಮಠ-ಕರಿಗೆರಸಿ ಮಧ್ಯೆ ೧.೯ ಕಿ.ಮೀ.ನ ೨ ಲಕ್ಷದ ರಸ್ತೆಗೆ ಜಲ್ಲಿ ಆಗಿದೆ. ನವೆಂಬರ್ ವೇಳೆಗೆ ಡಾಮರು ವಗೈರೆ ಮುಗಿಯಲಿದೆ.

### ನೀರಾವರಿ

೧. ಬಂಡಿಗಡಿ ಬಳಿ ಎತ್ತು ನೀರಾವರಿಗಾಗಿ ೩ ಲಕ್ಷ ರೂ. ರಾಜ್ಯದ ಮುಂಗಡ ಪತ್ರದಲ್ಲಿ ಮಂಜೂರಾಗಿದೆ. ಯೋಜನೆ ಸಿದ್ಧಪಡಿಸಲು ಶಿವಮೊಗ್ಗದ ಸಣ್ಣ ನೀರಾವರಿ ತನಿಖಾ ವಿಭಾಗಕ್ಕೆ ವಿನಂತಿಸಲಾಗಿದೆ.

೨. ನ.ರಾ. ಪುರ ತಾ॥ ನಲ್ಲಿ ಸುಮಾರು ೧ ಸಾವಿರ ಎಕರೆಗೆ ನೀರುಣಿಸುವ ಕೆ. ಕಣಬೂರು ಎತ್ತು ನೀರಾವರಿ (ತುಂಗಾ ನದಿಗೆ) ಯೋಜನೆ ೧೨.೪ ಲಕ್ಷದಿಂದ ೨೨ ಲಕ್ಷಕ್ಕೆ ಪರಿಷ್ಕರಿಸಲಾಗಿದೆ. ಹೆಚ್ಚು ಕಡಿಮೆ ಕೆಲಸ ಮುಗಿದಿತ್ತು. ಆದರೆ ಮೊನ್ನೆಯ ನೆರೆಯಲ್ಲಿ ಪಂಪ್‌ಹೌಸ್ ಮುಳುಗಡೆಯಾಗಿ ಯಂತ್ರೋಪಕರಣಗಳು ಸುಟ್ಟು ಹೋಗಿವೆ. ರಿಪೇರಿಗಾಗಿ ಟೆಂಡರ್ ಕರೆಯಲಾಗಿದೆ.

## ಖಾಸಗಿ ಬಸ್ ದರ ಇಳಿಸಲು ಸಿ.ಪಿ.ಐ ಒತ್ತಾಯ

ಚಿಕ್ಕಮಗಳೂರು: ಜಿಲ್ಲೆಯ ಗ್ರಾಮಾಂತರ ಪ್ರದೇಶಗಳಲ್ಲಿ ಚಾಲ್ತಿಯಲ್ಲಿರುವ ದುಬಾರಿ ಖಾಸಗಿ ಬಸ್ ದರವನ್ನು ಇಳಿಸುವಂತೆ ಒತ್ತಾಯಿಸಿ ಜಿಲ್ಲಾಧಿಕಾರಿಗಳಿಗೂ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೂ ಪತ್ರ ಬರೆದಿರುವ ಸಿಪಿಐ ಜಿಲ್ಲಾ ಮಂಡಳಿಯು, ಈ ಬಗ್ಗೆ ಅಲ್ಲಲ್ಲಿ ನಡೆಯುತ್ತಿರುವ ಚಳುವಳಿಗಳನ್ನು ಅವರ ಗಮನಕ್ಕೆ ತಂದಿದೆ. ಈ ಬಗ್ಗೆ ಒಂದು ನ್ಯಾಯಸಮ್ಮತ ಒಪ್ಪಂದಕ್ಕೆ ಬರಲು ಉಭಯತ್ರರ ಒಂದು ಸಭೆ ಕರೆಯುವಂತೆ ಅದು ಸೂಚಿಸಿದೆ.

## ಕೃಷಿ ಕೂಲಿಗಾರರ ಸಂಘದ ಹೋರಾಟ ಸಮಿತಿ

ತೀರ್ಥಹಳ್ಳಿ: ಎ.ಐ.ಟಿ.ಯು.ಸಿ.ಗೆ ಸೇರಿದ ತೀರ್ಥಹಳ್ಳಿ ತಾ॥ ಕೃಷಿ ಮತ್ತು ಇತರ ಕೂಲಿಗಾರರ ಸಂಘದ ಅ.೧೮ರ ಸಭೆಯಲ್ಲಿ, ತಾ॥ನಲ್ಲಿ ಚಾಲ್ತಿಯಲ್ಲಿರುವ ಕೂಲಿಯ ಒಂದು ಭಾಗವಾಗಿ ೧ ಕಿಲೋ ಅಕ್ಕಿ ಕೊಡುವ ಪದ್ಧತಿಯಲ್ಲಿ ನಡೆಯುತ್ತಿರುವ ಮೋಸ ತಪ್ಪಿಸಲು ಕೂಲಿಯನ್ನು ಪೂರ್ತಿ ನಗದು ರೂಪದಲ್ಲೇ ಕೇಳಬೇಕೆಂದು ತೀರ್ಮಾನಿಸಲಾಯಿತು.

ಸರ್ಕಾರದ ಹೇಳಿಕೆಗೆ ವಿರುದ್ಧವಾಗಿ ಕಟ್ಟಿಹಕ್ಲು ಕರ್ನಾಟಕ ಬ್ಯಾಂಕಿನವರು ಹಿಂದುಳಿದವರಿಗೆ ಸಾಲಕೊಡಲು ಜಾಮೀನು ಕೇಳುವುದರ ವಿರುದ್ಧ ಆಡಳಿತ ವರ್ಗಕ್ಕೆ ಎಚ್ಚರಿಕೆ ಕೊಡಲು ತೀರ್ಮಾನಿಸಲಾಯ್ತು.

ಹಲವು ಸಮಸ್ಯೆಗಳ ಬಗ್ಗೆ ಸರ್ಕಾರಕ್ಕೆ ಮನವಿ ಸಲ್ಲಿಸಿ, ಅಗತ್ಯ ಕಂಡಲ್ಲಿ ಹೋರಾಟ ನಡೆಸುವ ಸಲುವಾಗಿ ೧೦ ಜನರ ಹೋರಟ ಸಮಿತಿ ರಚಿಸಲಾಯ್ತು.

೩. ಮುತ್ತಿನ ಕೊಪ್ಪ ಬಳಿ (ತುಂಗಾ ನದಿ) ಎತ್ತು ನೀರಾವರಿಗೆ ೪೯ ಲಕ್ಷ ರೂ. ಯೋಜನೆ ಮಂಜೂರಾತಿಗೆ ಹೋಗಿದೆ. ಬಜೆಟ್ ಮಂಜೂರಾತಿ ಆಗಿದೆ. ಇದರ ಅಚ್ಚುಕಟ್ಟು ಸುಮಾರು ೧,೧೦೦ ಎಕರೆಗಳು.

ಸಂಪಾದಕ, ಮುದ್ರಕ ಮತ್ತು ಪ್ರಕಾಶಕ:
**ಸಿರಿಮನೆ ನಾಗರಾಜ್.**
ಅಚ್ಚು: ದೀವಟಿಗೆ ಅಚ್ಚುಕೂಟ, ಕೊಪ್ಪ.




# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

ರಿಜಿಸ್ಟರ್ಡ್ ನಂ. ಕೆಆರ್ ಎನ್ ಎಸ್ — ೧೯

ಸಂಪುಟ ೧ ಸಂಚಿಕೆ ೧೧ ಕೊಪ್ಪ ೩೧-೧೦-೮೨ ಭಾನುವಾರ ಬೆಲೆ ೪೦ ಪೈಸೆ



**ನಮ್ಮ ಪತ್ರಿಕೆಯ ಕಚೇರಿ**

ನಮ್ಮ ಪತ್ರಿಕೆಯ ಕಚೇರಿ ಹಾಗೂ ಅಚ್ಚುಕೂಟವನ್ನು ತಿಲಕ್ ರಸ್ತೆ (ಕಾಫಿ ಬೋರ್ಡ್ ಕಚೇರಿ ಇರುವ ರಸ್ತೆ) ಯ ೨೨ (೩) ನಂಬರಿನ ಮನೆಯಲ್ಲಿ ತೆರೆದಿದ್ದೇವೆ. (ಸಾರಿಮ್ಸ್ ಟೆಕ್ಸ್‌ಟೈಲ್ಸ್ ಹಿಂಭಾಗ.) **ಸಂಪಾದಕರನ್ನು ಭೇಟಿ ಮಾಡುವ ಸಮಯ: ಬೆಳಿಗ್ಗೆ ೧೧ ೩೦ ರಿಂದ ಸಂಜೆ ೪-೦೦ ಗಂಟೆವರೆಗೆ ಮಾತ್ರ.**

'ಮುಂಜಾವು' ಚಂದಾ ದರ: ಆಜೀವ ಚಂದಾ ೨೦೦ ರೂ
ವಾರ್ಷಿಕ ಚಂದಾ ೨೦ ರೂ; ಬಿಡಿ ಪ್ರತಿ ೪೦ ಪೈಸೆ


### ಪೋಲೀಸ್ ಇಲಾಖೆಗೆ ಸವಾಲಾದ ಘಟನೆ:

# ಜೈಲಿನಿಂದ ಕೈದಿಗಳು ಪರಾರಿ

ನ.ರಾ.ಪುರ: ಇಲ್ಲಿನ ಉಪಬಂದೀಖಾನೆಯಿಂದ ಅ.೨೭-೨೮ರ ರಾತ್ರಿ ಐವರು ಬಂದಿಗಳು ಮಾಳಿಗೆ ಕಿತ್ತು ಮಾಡಿನ ಹಂಚು ತೆಗೆದು ಪರಾರಿಯಾದ ಘಟನೆ ವರದಿಯಾಗಿದೆ. ಅವರಲ್ಲಿ ಮೂವರು ಶಿಕ್ಷೆಗೊಳಗಾದ ಬಂದಿಗಳು ಮತ್ತು ಇಬ್ಬರು ವಿಚಾರಣೆ ಎದುರಿಸುತ್ತಿದ್ದವರು.

ಬಾಳೆಹೊನ್ನೂರಿನ ಕಾಫಿ ಸಂಶೋಧನ ಕೇಂದ್ರದಲ್ಲಿ ಗುಮಾಸ್ತನಾಗಿದ್ದು ಹಣ ದುರುಪಯೋಗದ ಅಪರಾಧಕ್ಕಾಗಿ ೫ ವರ್ಷದ ಸಜೆ ಅನುಭವಿಸುತ್ತಿದ್ದ ರಮೇಶ, ಈಚೆಗೆ ಪೈ ಬಂಧಿಸಲ್ಪಟ್ಟು ೧ ವರ್ಷದ ಶಿಕ್ಷೆಗೆ ಗುರಿಯಾಗಿದ್ದ ಕೊಡಗಿನ ಕುಖ್ಯಾತ ಕಾರು ಕಳ್ಳರಾದ ಗಣೇಶ ಮತ್ತು ಆರ್ಮುಗಂ, ಗಂಧದ ಕಳ್ಳಸಾಗಣೆಯ ಆರೋಪದಲ್ಲಿ ವಿಚಾರಣೆ ಎದುರಿಸುತ್ತಿರುವ ನಜೀರ್ ಅಹಮದ್, ಹಾಗೂ ಬಂಡಿಗಡಿಯ ಪಂಚಲೋಹ ವಿಗ್ರಹಕಳುವಿನ ಆರೋಪದ ಮೇಲೆ ಈಚೆಗೆ ಕೊಪ್ಪ ಪೋಲೀಸರಿಂದ ಬಂಧಿಸಲ್ಪಟ್ಟು ವಿಚಾರಣೆ ಎದುರಿಸುತ್ತಿದ್ದ ಹಾಲ್ಮುತ್ತೂರಿನ ಜಯರಾಮು—ಇವರೇ ಆ 'ಸಾಹಸಿಗಳು'.

ರಮೇಶ ೧೯೮೧ರಲ್ಲಿ ನ್ಯಾಯಾಲಯದಲ್ಲಿ ಶಿಕ್ಷೆ ಘೋಷಣೆಯಾಗುತ್ತಿದ್ದಂತೆಯೇ ಪರಾರಿಯಾಗಿ ಅನಂತರ ಬೆಂಗಳೂರಲ್ಲಿ ಸಿಕ್ಕಿಬಿದ್ದಿದ್ದವನು. (೪ನೇ ಪುಟಕ್ಕೆ)

## ಶೃಂಗೇರಿ ಶರನ್ನವರಾತ್ರಿ ಉತ್ಸವ ಸಮಾಪ್ತಿ

ಶೃಂಗೇರಿ: ಇಲ್ಲಿನ ಅತಿ ಪ್ರಮುಖ ಉತ್ಸವವಾದ ಶರನ್ನವರಾತ್ರಿ ಪ್ರತಿ ವರ್ಷದಂತೆ ವೈಭವ, ಸಂಭ್ರಮದಿಂದ ನಡೆಯಿತು. ಸಹಸ್ರಾರು ಭಕ್ತರು ೧೫ ದಿನ ಪರ್ಯಂತ ವಿವಿಧ ಉತ್ಸವಗಳಲ್ಲಿ ಪಾಲ್ಗೊಂಡರು.

## ಲ್ಯಾಪ್ರೊಸ್ಕೊಪಿಕ್ ಚಿಕಿತ್ಸೆಗೆ 'ಧರ್ಮ'ದ ಆಕ್ಷೇಪಣೆ ಸಲ್ಲ

ಕೊಪ್ಪ: ಇಲ್ಲಿನ ಲಯನ್ಸ್ ಕ್ಲಬ್ ಮತ್ತು ಆರೋಗ್ಯ ಕೇಂದ್ರ ಜಂಟಿಯಾಗಿ ನ. ೪ಕ್ಕೆ ವ್ಯವಸ್ಥೆಗೊಳಿಸಿರುವ ಉದರ ದರ್ಶಕ ಸಂತಾನ ಹರಣ ಶಸ್ತ್ರಚಿಕಿತ್ಸಾ ಶಿಬಿರದಲ್ಲಿ ಭಾಗವಹಿಸಲು ಮುಸ್ಲಿಂ ಮಹಿಳೆಯರು ಒಪ್ಪುತ್ತಿಲ್ಲವೆಂದು ತಿಳಿದು ಬಂದಿದೆ.

ಸಂತಾನ ನಿರೋಧ ಖುರಾನಿಗೆ ವಿರುದ್ಧ ಎಂಬ ನಂಬಿಕೆ ಇದಕ್ಕೆ ಕಾರಣವೆನ್ನಲಾಗಿದೆ.

### ಭ್ರೂಣ ಹತ್ಯೆಯಲ್ಲ

ಲ್ಯಾಪ್ರೊಸ್ಕೊಪಿಕ್ ಚಿಕಿತ್ಸೆ ಭ್ರೂಣಹತ್ಯೆಯಲ್ಲ. ಭ್ರೂಣಹತ್ಯೆ ಎಲ್ಲಾಧರ್ಮದವರಲ್ಲೂ ನಿಷಿದ್ಧವೆಂದು ನಂಬಿಕೆಯಿದೆ. ಆದರೆ ಸಂತಾನ ಮಿತಿ ಗೊಳಿಸುವುದನ್ನು ಮನುಷ್ಯಪ್ರೇಮವಿರುವ ಯಾವ ಧರ್ಮವೂ ನಿಷೇಧಿಸಲಾರದು.

ಕೇವಲ ಮುಸ್ಲಿಮರಾಗಿ ಹುಟ್ಟಿದ ಮಾತ್ರಕ್ಕೇ ಈ ದೇಶದಲ್ಲಿ ಅಪನಂಬಿಕೆಗೆ ಗುರಿಯಾಗಿರುವ; ಬಡತನ, ನಿರುದ್ಯೋಗ, ಅನಕ್ಷರತೆ, ರೋಗರುಜಿನಗಳಿಂದ ತೊಳಲುತ್ತಿರುವ ಕೋಟ್ಯಾಂತರ ಭಾರತೀಯ ಮುಸ್ಲಿಮರ ಬಗೆಗಾದರೂ ಇಲ್ಲಿನ ಮುಸ್ಲಿಂ ಮುಖಂಡರುಗಳು ವಾಸ್ತವಿಕತೆಯಿಂದ ಯೋಚಿಸುವುದು ಅಗತ್ಯ. ಈ ದೃಷ್ಟಿಯಿಂದ, ಅಪಾರ ಮನುಷ್ಯ ಪ್ರೇಮವನ್ನು ಹೊತ್ತ ಇಸ್ಲಾಂ ಮತ್ತು ಖುರಾನನ್ನು ಅವರು ಸರಿಯಾಗಿ ಅರ್ಥಮಾಡಿಕೊಳ್ಳಬೇಕಾಗಿದೆ.

## ಕೊಪ್ಪ ತಾ.ಅ.ಮಂ.ಸದಸ್ಯ ಜಿ.ಎಸ್.ಶ್ರೀನಿವಾಸ್ ಮೇಲೆ ಹಲ್ಲೆ

ಕೊಪ್ಪ: ಇಲ್ಲಿನ ತಾ.ಅ.ಮಂ.ಸದಸ್ಯರಾದ ಗೋಳಿಕೊಪ್ಪದ ಜಿ.ಎಸ್.ಶ್ರೀನಿವಾಸ್ ಅವರ ಮೇಲೆ ಅ.೨೫ರ ರಾತ್ರಿ ತೀವ್ರವಾಗಿ ಹಲ್ಲೆ ನಡೆದಿದ್ದು, ಚಿಕ್ಕಮಗಳೂರಿನ ಆಸ್ಪತ್ರೆಗೆ ದಾಖಲಾಗಿರುವ ಅವರು ನಿಧಾನವಾಗಿ ಚೇತರಿಸಿ ಕೊಳ್ಳುತ್ತಿದ್ದಾರೆ.

ಈ ಸಂಬಂಧ ಕೊಪ್ಪ ಪಂಚಾಯ್ತಿ ಉಪಾಧ್ಯಕ್ಷ ಜಿ.ಡಿ.ಪರಮೇಶ್ವರ ಅವರನ್ನು ಬಂಧಿಸಿ ಜಾಮೀನಿನ ಮೇಲೆ ಬಿಡುಗಡೆ ಮಾಡಿರುವುದಾಗಿ ತಿಳಿದು ಬಂದಿದೆ.

ಹಳೆಯ ಸೇಡು ಹಲ್ಲೆಗೆ ಕಾರಣವೆನ್ನಲಾಗಿದೆ. ಇದರಿಂದಾಗಿ ಅವರು ಅ.೩೦ರ ಪಂ. ಅಧ್ಯಕ್ಷ ಚುನಾವಣೆಯಲ್ಲಿ ಭಾಗವಹಿಸಲಾಗಲಿಲ್ಲ.

## 'ಜಗ್ಗು'ಗೆ ಕೊಪ್ಪದಲ್ಲಿ ಚಿತ್ರೀಕರಣ

ಕೊಪ್ಪ: ತರುಣ ನಿರ್ದೇಶಕ ವಿಜಯ್ ಗುಜ್ಜಾರ್ ನಿರ್ದೇಶಿಸುತ್ತಿರುವ, ಜಯಗೋಪಾಲ್ ಚಿತ್ರ ಕತೆಯ ಬಣ್ಣದ ಚಿತ್ರ 'ಜಗ್ಗು'ಗಾಗಿ ಕೊಪ್ಪ ಮತ್ತು ಕೋಡಿಹಿತ್ಲಿನಲ್ಲಿ ಒಂದು ವಾರದಿಂದ ಚಿತ್ರೀಕರಣ ನಡೆಯುತ್ತಿದೆ.

ಜಗ್ಗುವಾಗಿ ಅಂಬರೀಶ್ ಅಭಿನಯಿಸುತ್ತಿದ್ದು, ಇತರ ಮುಖ್ಯ ಪಾತ್ರಗಳಲ್ಲಿ ಆರತಿ, ಜೈಜಗದೀಶ್ ಗೂಳಿ 'ರಾಮು' ಮುಂತಾದವರು ಚಿತ್ರೀಕರಣದಲ್ಲಿ ಪಾಲ್ಗೊಂಡಿದ್ದರು.

ಇದಕ್ಕೆ ಮೊದಲು ತೀರ್ಥಹಳ್ಳಿ ಸುತ್ತಮುತ್ತ ಚಿತ್ರೀಕರಣ ನಡೆದಿತ್ತು. ಸುಮಾರು ೧೪ ಸಾವಿರ ಅಡಿಗಳಷ್ಟಿರುವ ಈ ಚಿತ್ರ ಮುಕ್ತಾಯದ ಹಂತದಲ್ಲಿ ಇರುವುದಾಗಿ ವಿಜಯ್ 'ಮುಂಜಾವು'ಗೆ ತಿಳಿಸಿದರು.

## ಬೇಗಾರು ಸೇತುವೆ ರಿಪೇರಿ ಕೆಲಸ ಶುರುವಾಗಿಲ್ಲ

ಬೇಗಾರು: ಇಲ್ಲಿಗೆ ಸಮೀಪದ ಸೇತುವೆಯ ರಿಪೇರಿ ಕೆಲಸ ಇನ್ನೂ "ಶುರುವಾಗಿಲ್ಲ" ಎಂದು ತಿಳಿದು ಬಂದಿದೆ.

'ಮುಂಜಾವು'ಗೆ ಕೊಟ್ಟ ಮಾಹಿತಿಯಲ್ಲಿ ಲೋಕೋಪಯೋಗಿ ಇಲಾಖೆ ಸ॥ ಕಾ॥ ಇಂಜಿನಿಯರ್ ವೆಂಕಟಯ್ಯ ಅವರು "ಸೋಮವಾರದಿಂದಲೇ" (ಅ.೧೮) ಕೆಲಸ ಶುರುವಾಗುವುದಾಗಿ ತಿಳಿಸಿದ್ದರು. ('ಮುಂಜಾವು' ೧೭-೧೦-೮೨)

ಪತ್ರಿಕೆಗಳಿಗೆ ಹೇಳಿಕೆ ಕೊಟ್ಟು ಪ್ರಚಾರ ಪಡೆದು ಇನ್ನೂ ಯಾಕೆ ಕೆಲಸ ಪ್ರಾರಂಭಿಸಿಲ್ಲ ಎಂದು ಜನ ಕೇಳುತ್ತಿದ್ದಾರೆ; ಇಲಾಖೆಯ ಬಗ್ಗೆ ವ್ಯಂಗ್ಯವಾಡುತ್ತಿದ್ದಾರೆ.

### ಅಡ್ಡಗದ್ದೆ ಬಳಿ ಮತ್ತೆ

# ಗಂಧವಶ; ಮೂವರ ಬಂಧನ

**ಶೃಂಗೇರಿ: ಅಡ್ಡಗದ್ದೆಯ ಬಳಿ ಸಿಂದೊಳ್ಳಿ ಎಂಬಲ್ಲಿ ಪುಸಃ ೩೫ ಸಾವಿರ ರೂ. ಬೆಲೆಯ ಶ್ರೀಗಂಧವನ್ನು ಶೃಂಗೇರಿ ಪೋಲೀಸರು ಪತ್ತೆ ಹಚ್ಚಿ ಮೂವರನ್ನು ಬಂಧಿಸಿದ್ದಾರೆ.**

ಈ ಒಂದು ತಿಂಗಳಿಂದೀಚೆಗೆ ಇಲ್ಲಿ ಇದು ಶ್ರೀಗಂಧ ಪತ್ತೆಯ ಎರಡನೆಯ ಪ್ರಕರಣವಾಗಿದೆ.

ಈ ಗಂಧ ಸಾಗಣೆ ಗುಂಪಿನ ಇನ್ನೊಬ್ಬ ವ್ಯಕ್ತಿ ತಲೆತಪ್ಪಿಸಿಕೊಂಡಿದ್ದು ಅವನಿಗಾಗಿ ಶೃಂಗೇರಿ ಪೋಲೀಸರು ತೀವ್ರವಾಗಿ ಹುಡುಕುತ್ತಿದ್ದಾರೆ.

**ಅವ್ಯವಹಾರದ ಕೇಂದ್ರಗಳ ಮೇಲೆ ತೀವ್ರ ದಾಳಿ**

ಈಚೆಗೆ ರಮಾನಂದ ರೈ ಶೃಂಗೇರಿ ಠಾಣಾಧಿಕಾರಿಯಾಗಿ ಬಂದಮೇಲೆ ಮಟ್ಕಾ ವ್ಯವಹಾರ, ಗಂಧ ಸಾಗಣೆ ಮುಂತಾದ ಅವ್ಯವಹಾರಗಳ ಮೇಲೆ ತೀವ್ರ ದಾಳಿಗಳನ್ನು ನಡೆಸುತ್ತಿರುವುದು ಆ ವ್ಯವಹಾರದ 'ಒಳ ಪ್ರಪಂಚ'ದಲ್ಲಿ ತಲ್ಲಣ ಹುಟ್ಟಿಸಿರುವಂತೆ ಜನ ಸಾಮಾನ್ಯರ ಅಭಿನಂದನೆಗೂ ಪಾತ್ರವಾಗಿರುವುದಾಗಿ ಹೇಳಲಾಗಿದೆ.

## ಜಿ.ಡಿ.ಪರಮೇಶ್ವರ ಕೊಪ್ಪ ಪಂಚಾಯ್ತಿ ಹೊಸ ಅಧ್ಯಕ್ಷ

ಕೊಪ್ಪ: ಇಲ್ಲಿನ ಗ್ರಾಮ ಪಂಚಾಯ್ತಿಗೆ ಅ. ೩೦ ರಂದು ನಡೆದ ಅಧ್ಯಕ್ಷ ಚುನಾವಣೆಯಲ್ಲಿ ಗುಣವಂತೆಯ ಜಿ.ಡಿ.ಪರಮೇಶ್ವರ ಜಯಗಳಿಸಿದ್ದಾರೆ.

ಅವರಿಗೆ ೬ ಮತಗಳೂ ಇನ್ನೊಬ್ಬ ಅಭ್ಯರ್ಥಿ ಸಿಗದಾಳಿನ ಎಸ್.ಪಿ.ಚಂದ್ರಶೇಖರ್‌ಗೆ ೫ ಮತಗಳೂ ಬಂದಿದ್ದು ಒಂದು ಮತ ಅಸಿಂಧುವಾಯಿತು. ೩ ಜನ ಸದಸ್ಯರು ಗೈರು ಹಾಜರಾಗಿದ್ದರು.

ಹೊಸ ಅಧ್ಯಕ್ಷರ ಅವಧಿ ೧೯೮೩ರ ನವೆಂಬರ್ ವರೆಗಿರುತ್ತದೆ. ೧೯೮೦ರ ನವೆಂಬರಿನಲ್ಲಿ ನಡೆದ ಚುನಾವಣೆಯಲ್ಲಿ ಅಧ್ಯಕ್ಷರಾದ ಸಿಗದಾಳಿನ ಎಸ್.ಪಿ ರಾಮಮೋಹನ್ ಈಚೆಗಷ್ಟೇ ರಾಜೀನಾಮೆ ನೀಡಿದ್ದರು.

ಇನ್ನಾದರೂ ಪಂಚಾಯ್ತಿಯೊಳಗೆ ಅಭಿವೃದ್ಧಿ ಕೆಲಸಗಳು ನಡೆಯುತ್ತವೆಯೆಂದು ನಿರೀಕ್ಷಿಸಲಾಗಿದೆ.

### ಹಳ್ಳದ ಅಣೆಕಟ್ಟಿನ ನಿರೀಕ್ಷೆಯಲ್ಲೇ

## ಲೋಕ ಬಿಟ್ಟ ಕಾನೂರು ಹರಿಜನರು

ನರಸಿಂಹರಾಜಪುರ: ಈ ತಾಲ್ಲೂಕಿನ ಕಾನೂರು ಒಂದು ಕುಗ್ರಾಮ. ಇಲ್ಲಿ ಸುಮಾರು ೧೫-೧೬ ಹರಿಜನ ಕುಟುಂಬಗಳಿವೆ. ಅವರೆಲ್ಲ ೨೦ ವರ್ಷಗಳ ಹಿಂದೆ ಭದ್ರಾ ಮುಳುಗಡೆ ಪ್ರದೇಶದಿಂದ ಬಂದು ನೆಲೆಸಿದವರು. ಅವರಿಗೆ ತಲಾ ೪ ಎಕ್ರೆ ಭೂಮಿ ಕೂಡ ಕೊಡಲಾಗಿದೆ.

ಆದರೆ ಆ ಭೂಮಿಗೆ ನೀರಿನ ಆಶ್ರಯ ಅತಂತ್ರ. ಸೆಪ್ಟೆಂಬರ್ – ಅಕ್ಟೋಬರ್ ಹೊತ್ತಿಗೆಲ್ಲ ನೀರಿಲ್ಲದೆ ಪೈರು ಒಣಗುತ್ತದೆ. ಹಾಗೆಂದು ಬೆಳೆ ತೆಗೆಯದೆ ಇರಲು ಆಗುವುದಿಲ್ಲವಲ್ಲ.

(೪ನೇ ಪುಟಕ್ಕೆ)

## ಜಾಹೀರಾತಿಗೆ 'ಮುಂಜಾವು' ಅತ್ಯುತ್ತಮ ಮಾಧ್ಯಮ